# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 1109

ಉತ್ತರಿಸಬೇಕಾದ ದಿನಾಂಕ : 13.03.2020

ಸದಸ್ಯರ ಹೆಸರು : ಶ್ರೀಮತಿ ಎಸ್. ವೀಣಾ ಅಚ್ಚಯ್ಯ

ಉತ್ತರಿಸುವ ಸಚಿವರು : ಮಾನ್ಯ ಪ್ರವಾಸೋದ್ಯಮ ಮತ್ತು ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಕೊಡಗು ಜಿಲ್ಲೆಯಲ್ಲಿ ಖ್ಯಾತಿ ಪಡೆದಿರುವ ಕ್ರೀಡಾ ಹಾಸ್ಟೆಲ್ ಹಾಗೂ ತರಬೇತಿ ಕೇಂದ್ರಗಳಲ್ಲಿ ವಿಶ್ವದರ್ಜೆಯ ಸೌಲಭ್ಯಗಳ ಕೊರತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ | ಬಂದಿದ್ದಲ್ಲಿ, ಶ್ರೇಷ್ಠ ಗುಣಮಟ್ಟದ ಸೌಲಭ್ಯಗಳನ್ನು ಒದಗಿಸಲು ಪ್ರಸಕ್ತ ಆರ್ಥಿಕ ವರ್ಷದಲ್ಲಿ ಸರ್ಕಾರ ಕೈಗೊಂಡಿರುವ ಕಾರ್ಯಕ್ರಮಗಳೇನು; | ಕೊಡಗು ಜಿಲ್ಲೆಯ ಕ್ರೀಡಾ ಹಾಸ್ಟೆಲ್ ಮತ್ತು ತರಬೇತಿ ಕೇಂದ್ರಗಳಲ್ಲಿ ವಿಶ್ವ ದರ್ಜೆಯ ಸೌಲಭ್ಯಗಳನ್ನು ಒದಗಿಸುವ ನಿಟ್ಟಿನಲ್ಲಿ ಕೆಳಕಾಣಿಸಿದ ಕ್ರಮ ಕೈಗೊಳ್ಳಲಾಗಿದೆ.<br>1. ಕೊಡಗು ಜಿಲ್ಲೆಯ ಕೂಡಿಗೆ ಕ್ರೀಡಾ ವಸತಿ ಶಾಲೆಯಲ್ಲಿ ರೂ 342.05 ಲಕ್ಷ ವೆಚ್ಚದಲ್ಲಿ ಅಂತರ-ರಾಷ್ಟ್ರೀಯ ಗುಣಮಟ್ಟದ ಸಿಂಥೆಟಿಕ್ ಹಾಕಿ ಟರ್ಫ್ ಅಳವಡಿಸಲಾಗಿದ್ದು, ಕಾಮಗಾರಿ ಅಂತಿಮ ಹಂತದಲ್ಲಿದೆ.<br>2. ಸೋಮವಾರಪೇಟೆಯಲ್ಲಿ ಅಂತರ-ರಾಷ್ಟ್ರೀಯ ಗುಣಮಟ್ಟದ ಹಾಕಿ ಟರ್ಫ್ ಅಳವಡಿಸುವ ಕಾಮಗಾರಿ ಪ್ರಗತಿಯಲ್ಲಿದೆ.<br>3. ಸರ್ಕಾರದ ಆದೇಶ ಸಂಖ್ಯೆ: ವೈಎಸ್ ಡಿ/ಇಪಿಇ/36/2019, ಬೆಂಗಳೂರು, ದಿನಾಂಕ: 06-01-2020 ರನ್ವಯ ಮಡಿಕೇರಿಯಲ್ಲಿ ರೂ 250.00 ಲಕ್ಷ ವೆಚ್ಚದಲ್ಲಿ ಕ್ರೀಡಾ ವಸತಿ ನಿಲಯ ಕಟ್ಟಡ ನಿರ್ಮಿಸಲು ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ. |
| ಇ | ಕ್ರೀಡಾಪಟುಗಳಿಗೆ ಅಂತರರಾಷ್ಟ್ರೀಯ ಮಟ್ಟದಲ್ಲಿನ ಸ್ಪರ್ಧೆಗೆ ಅನುವಾಗಲು ಸರ್ಕಾರ ರೂಪಿಸಿರುವ ದೀರ್ಘಕಾಲಿಕ ಯೋಜನೆಗಳೇನು; ಆ ಯೋಜನೆ/ಸೌಲಭ್ಯಗಳ ಅನುಷ್ಠಾನಕ್ಕಾಗಿ ಜಿಲ್ಲೆಯಲ್ಲಿ ಈ ವರ್ಷ ವಿನಿಯೋಗಿಸುತ್ತಿರುವ ಅನುದಾನದ ವಿವರ ನೀಡುವುದು? | ಕ್ರೀಡಾಪಟುಗಳು ಅಂತರ-ರಾಷ್ಟ್ರೀಯ ಮಟ್ಟದ ಸ್ಪರ್ಧೆಗೆ ಸಿದ್ಧರಾಗಲು ಕೆಳಕಾಣಿಸಿದ ಪ್ರಮುಖ ಸೌಲಭ್ಯಗಳನ್ನು ಕಲ್ಪಿಸಲಾಗಿದ್ದು, ದೀರ್ಘಕಾಲೀನ ಯೋಜನೆ ರೂಪಿಸಲಾಗಿದೆ.<br>**ಅ. ವಿಶ್ವ ದರ್ಜೆಯ ಕ್ರೀಡಾ ಮೂಲಭೂತ ಸೌಕರ್ಯಗಳು:**<br>1. ಕೊಡಗು ಜಿಲ್ಲೆಯ ಕೂಡಿಗೆ ಕ್ರೀಡಾ ಶಾಲೆಯಲ್ಲಿ ಅಂತರ-ರಾಷ್ಟ್ರೀಯ ಗುಣಮಟ್ಟದ ಸಿಂಥೆಟಿಕ್ ಅಥ್ಲೆಟಿಕ್ ಟ್ರ್ಯಾಕ್ ಅಳವಡಿಸಲಾಗಿದ್ದು, ಕ್ರೀಡಾಪಟುಗಳ ಬಳಕೆಯಲ್ಲಿದೆ.<br>2. ಹಾಕಿ ಕ್ರೀಡಾಪಟುಗಳ ತರಬೇತಿಗಾಗಿ ಅಂತರ-ರಾಷ್ಟ್ರೀಯ |

| | | |
|---|---|---|
| | | ಗುಣಮಟ್ಟದ ಹಾಕಿ ಟರ್ಫ್ ಅಳವಡಿಸುವ ಕಾಮಗಾರಿ ಅಂತಿಮ ಹಂತದಲ್ಲಿದೆ. ಸದರಿ ಕಾಮಗಾರಿಗೆ ಸಂಬಂಧಿಸಿದಂತೆ ಲೆಟರ್ ಆಫರ್ ಕ್ರೆಡಿಟ್ ಒಟ್ಟು ಮೊತ್ತವಾದ ರೂ 192.78 ಲಕ್ಷಗಳಲ್ಲಿ, ಪ್ರಸಕ್ತ ಸಾಲಿನಲ್ಲಿ ರೂ 49.00 ಲಕ್ಷ ವೆಚ್ಚ ಭರಿಸಲು ಕ್ರಮ ವಹಿಸಲಾಗಿದೆ.<br>3. ಕೊಡಗು ಜಿಲ್ಲೆಯ ಪೊನ್ನಂಪೇಟೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಕ್ರೀಡಾ ವಸತಿ ನಿಲಯದ ಕ್ರೀಡಾಪಟುಗಳ ತರಬೇತಿಗೆ ಅನುಕೂಲವಾಗುವಂತೆ ಹಾಕಿ ಮೈದಾನಕ್ಕೆ ಅಂತರ-ರಾಷ್ಟ್ರೀಯ ಗುಣಮಟ್ಟದ ಹಾಕಿ ಟರ್ಫ್ ಅಳವಡಿಸಲಾಗಿದ್ದು, ಕ್ರೀಡಾಪಟುಗಳ ದೈನಂದಿನ ತರಬೇತಿಗೆ ಅವಕಾಶ ಕಲ್ಪಿಸಲಾಗಿದೆ.<br>4. ಸೋಮವಾರಪೇಟೆಯಲ್ಲಿ ಅಂತರ-ರಾಷ್ಟ್ರೀಯ ಗುಣಮಟ್ಟದ ಹಾಕಿ ಟರ್ಫ್ ಅಳವಡಿಸುವ ಕಾಮಗಾರಿ ಪ್ರಗತಿಯಲ್ಲಿದ್ದು, ಸದರಿ ಕಾಮಗಾರಿಯ ಅಂಗವಾಗಿ ಆಮದು ಮಾಡಿಕೊಳ್ಳಲಾಗುವ ಹಾಕಿ ಟರ್ಫ್ ಸಾಮಗ್ರಿ ಬಾಬ್ತು ರೂ 259.00 ಲಕ್ಷ ಮೊತ್ತದ ಲೆಟರ್ ಆಫ್ ಕ್ರೆಡಿಟ್ ತೆರೆಯಲಾಗಿದೆ.<br>5. ವಿರಾಜಪೇಟೆಯಲ್ಲಿ ಒಳಾಂಗಣ ಕ್ರೀಡಾಂಗಣವನ್ನು ನಿರ್ಮಿಸಲಾಗಿದ್ದು, ಸದರಿ ಕಾಮಗಾರಿ ಬಾಬ್ತು ಪ್ರಸಕ್ತ ಸಾಲಿನಲ್ಲಿ ರೂ 131.85 ಲಕ್ಷ ವೆಚ್ಚ ಭರಿಸಲಾಗಿರುತ್ತದೆ.<br>6. ಕೊಡಗು ಜಿಲ್ಲೆಯ ಕೂಡಿಗೆ ಕ್ರೀಡಾ ಶಾಲೆಯಲ್ಲಿ ಹೊಸ ಶೌಚಾಲಯಗಳ ನಿರ್ಮಾಣ, ಅಡುಗೆ ಮನೆ, ಊಟದ ಕೊಠಡಿ ಹಾಗೂ ದಾಸ್ತಾನು ಕೊಠಡಿಯ ವಿಸ್ತರಣೆ ಹಾಗೂ ನವೀಕರಣ ಮತ್ತಿತರ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲಾಗಿದ್ದು, 2019-20 ನೇ ಸಾಲಿನಲ್ಲಿ ಒಟ್ಟು ರೂ 100.00 ಲಕ್ಷ ವೆಚ್ಚ ಭರಿಸಲಾಗಿದ್ದು, ಕಾಮಗಾರಿ ಪ್ರಗತಿಯಲ್ಲಿದೆ. ಅಲ್ಲದೇ, ಕ್ರೀಡಾಪಟುಗಳ ಸುರಕ್ಷತೆಗಾಗಿ ಸಿ.ಸಿ.ಟಿ.ವಿ. ಅಳವಡಿಸಲಾಗಿದ್ದು, ದೈನಂದಿನ ಅಗತ್ಯತೆಗಳಾದ ಹಾಸಿಗೆ, ಹೊದಿಕೆ ಮತ್ತಿತರ ಸಾಮಗ್ರಿಗಳನ್ನು ನೀಡಲು ಆದ್ಯತೆ ನೀಡಲಾಗಿದೆ.<br><br>**ಆ: ಕ್ರೀಡಾಪಟುಗಳನ್ನು ಉತ್ತೇಜಿಸಲು ಹಮ್ಮಿಕೊಂಡ ಕಾರ್ಯಕ್ರಮಗಳು:**<br><br>1. **ಕ್ರೀಡಾ ವಿದ್ಯಾರ್ಥಿ ವೇತನ:** ಕ್ರೀಡಾಪಟುಗಳನ್ನು ಉತ್ತೇಜಿಸಲು ಪ್ರತಿಭಾವಂತ ಮಾಧ್ಯಮಿಕ ಶಾಲಾ ಹಂತದ ಕ್ರಿಡಾಪಟುಗಳಿಗೆ ಕ್ರೀಡಾ ವಿದ್ಯಾರ್ಥಿ ವೇತನ ನೀಡಲಾಗುತ್ತಿದ್ದು, 2019-20 ನೇ ಸಾಲಿನಲ್ಲಿ ಒಟ್ಟು 28 ಕ್ರೀಡಾಪಟುಗಳಿಗೆ ರೂ 2.80 ಲಕ್ಷ ವಿತರಿಸಲಾಗಿದೆ. |

| | | |
|---|---|---|
| | | 2. **ಪ್ರತಿಭಾವಂತ ಕ್ರೀಡಾಪಟುಗಳು ಶೈಕ್ಷಣಿಕ ಶುಲ್ಕ ಮರುಪಾವತಿ:** ಈ ಕಾರ್ಯಕ್ರಮದಡಿ ಪ್ರತಿಭಾವಂತ ಕ್ರೀಡಾಪಟುಗಳ ಶೈಕ್ಷಣಿಕ ಶುಲ್ಕ ಮರುಪಾವತಿ ಮಾಡಲಾಗುತ್ತಿದೆ. 2019-20 ನೇ ಸಾಲಿನಲ್ಲಿ ಒಬ್ಬ ಕ್ರೀಡಾಪಟುವಿಗೆ ರೂ 11,235/- ಮೊತ್ತದ ಶೈಕ್ಷಣಿಕ ಶುಲ್ಕ ಮರುಪಾವತಿ ಮಾಡಲಾಗಿರುತ್ತದೆ.<br>3. **ಪದಕ ವಿಜೇತ ಕ್ರೀಡಾಪಟುಗಳಿಗೆ ನಗದು ಪುರಸ್ಕಾರ:** ಮಾನ್ಯತೆ ಪಡೆದ ಕ್ರೀಡಾಕೂಟಗಳಲ್ಲಿ ಪದಕ ವಿಜೇತರಾಗುವ ಕ್ರೀಡಾಪಟುಗಳಿಗೆ ನಿಗಧಿತ ಮೊತ್ತದ ನಗದು ಬಹುಮಾನ ನೀಡಲಾಗುತ್ತಿದೆ. ಈ ಕಾರ್ಯಕ್ರಮದಡಿ ಒಲಿಂಪಿಕ್ಸ್ ನಲ್ಲಿ ಚಿನ್ನ, ಬೆಳ್ಳಿ ಮತ್ತು ಕಂಚಿನ ಪದಕ ಗೆಲ್ಲುವ ಕ್ರೀಡಾಪಟುಗಳಿಗೆ ಕ್ರಮವಾಗಿ ರೂ 5.00 ಕೋಟಿ, ರೂ 3.00 ಕೋಟಿ ಮತ್ತು ರೂ 2.00 ಕೋಟಿ ನಗದು ಬಹುಮಾನ ಘೋಷಿಸಲಾಗಿದೆ. 2019-20 ನೇ ಸಾಲಿನಲ್ಲಿ ಏಷ್ಯನ್ ಗೇಮ್ಸ್ ಕಂಚಿನ ಪದಕ ವಿಜೇತರಾದ ಹಾಕಿ ಕ್ರೀಡಾಪಟು ಶ್ರೀ ಎಸ್.ವಿ. ಸುನೀಲ್ ಇವರಿಗೆ ರೂ 8.00 ಲಕ್ಷ ನಗದು ಬಹುಮಾನ ವಿತರಿಸಲಾಗಿದೆ.<br>4. **ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಕ್ರೀಡಾಪಟುಗಳಿಗೆ ವಿಶೇಷ ಪ್ರೋತ್ಸಾಹಧನ:** ಈ ಕಾರ್ಯಕ್ರಮದಡಿ ಅಂತರ-ರಾಷ್ಟ್ರೀಯ, ರಾಷ್ಟ್ರೀಯ ಮತ್ತು ರಾಜ್ಯ ಮಟ್ಟದ ಮಾನ್ಯತೆ ಪಡೆದ ಕ್ರೀಡಾಕೂಟಗಳಲ್ಲಿ ಪದಕ ವಿಜೇತ ಕ್ರೀಡಾಪಟುಗಳಿಗೆ ಕ್ರಮವಾಗಿ ರೂ 5.00 ಲಕ್ಷ, ರೂ 3.00 ಲಕ್ಷ ಮತ್ತು ರೂ 1.00 ಲಕ್ಷ ವಿಶೇಷ ಪ್ರೋತ್ಸಾಹಧನ ನೀಡಲಾಗುತ್ತಿದೆ. 2019-20 ನೇ ಸಾಲಿನಲ್ಲಿ ಕೊಡಗು ಜಿಲ್ಲೆಯ 06 ಪರಿಶಿಷ್ಟ ಜಾತಿಯ ಮತ್ತು ಒಬ್ಬರು ಪರಿಶಿಷ್ಟ ಪಂಗಡದ ಪ್ರತಿಭಾವಂತ ಕ್ರೀಡಾಪಟುಗಳಿಗೆ ಒಟ್ಟು ರೂ 9.00 ಲಕ್ಷ ವಿತರಿಸಲಾಗಿದೆ.<br>5. **ಸ್ಪೋರ್ಟ್ಸ್ ಅಕಾಡೆಮಿ ಫಾರ್ ಎಕ್ಸಲೆನ್ಸ್:** ಈ ಕಾರ್ಯಕ್ರಮದಡಿ ಒಲಿಂಪಿಕ್, ಏಷ್ಯನ್ ಗೇಮ್ಸ್ ಮತ್ತು ಕಾಮನ್ ವೆಲ್ತ್ ಕ್ರೀಡಾಕೂಟಗಳಲ್ಲಿ ಪದಕ ವಿಜೇತರಾಗುವ ಸಂಭಾವ್ಯ ಯುವ ಕ್ರೀಡಾಪಟುಗಳಿಗೆ ಕ್ರೀಡಾ ತರಬೇತಿ, ಕ್ರೀಡಾ ಕಿಟ್, ಪ್ರಯಾಣ ವೆಚ್ಚ ಇತ್ಯಾದಿಗಳಿಗಾಗಿ ಸಹಾಯಧನ ನೀಡಲಾಗುತ್ತಿದೆ.<br>6. ಸರ್ಕಾರದ ಆದೇಶ ಸಂಖ್ಯೆ: ವೈಎಸ್ ಡಿ/ಇಪಿಇ/29/ 2019, ಬೆಂಗಳೂರು, ದಿನಾಂಕ: 28-11-2019 ರನ್ವಯ ಕ್ರೀಡಾ ವಸತಿ ಶಾಲೆ/ನಿಲಯದ ಕ್ರೀಡಾಪಟುಗಳ ಊಟೋಪಹಾರ ದಿನಭತ್ಯೆಯನ್ನು ಭಾರತೀಯ ಕ್ರೀಡಾ ಪ್ರಾಧಿಕಾರದ ಮಟ್ಟಕ್ಕೆ ಹೆಚ್ಚಿಸಲಾಗಿದ್ದು, 5 ರಿಂದ 10 ನೇ ತರಗತಿವರೆಗಿನ |

| | | | |
|---|---|---|---|
| | | | ಕ್ರೀಡಾಪಟುಗಳಿಗೆ ದಿನ ಒಂದಕ್ಕೆ ಒಬ್ಬರಿಗೆ ರೂ 225/- ಹಾಗೂ ಪ್ರಥಮ ಪಿಯುಸಿ ಮತ್ತು ಮೇಲ್ಪಟ್ಟ ಕ್ರೀಡಾಪಟುಗಳಿಗೆ ದಿನ ಒಂದಕ್ಕೆ ಒಬ್ಬರಿಗೆ ರೂ 300/- ಊಟೋಪಹಾರದ ಬಾಬ್ತು ನಿಗಧಿಪಡಿಸಿದೆ. ಸದರಿ ಪರಿಷ್ಕೃತ ಮೆನು ಪಟ್ಟಿಯಂತೆ ಆಹಾರ ಪೂರೈಕೆಯು ಕ್ರೀಡಾಪಟುಗಳಿಗೆ ಉನ್ನತ ಗುಣಮಟ್ಟದ ಪೌಷ್ಟಿಕಾಂಶಯುಕ್ತ ಆಹಾರ ಪೂರೈಕೆಗೆ ಸಹಕಾರಿಯಾಗಲಿದ್ದು, ಕ್ರೀಡಾ ಪ್ರದರ್ಶನ ಉತ್ತಮಗೊಳ್ಳಲು ಪೂರಕವಾಗಿದೆ. ಪ್ರಸ್ತುತ ಪರಿಷ್ಕೃತ ಮೆನು ಪಟ್ಟಿ ಅನುಸಾರ ಊಟೋಪಹಾರ ಸರಬರಾಜು ಮಾಡುವ ಬಗ್ಗೆ ಟೆಂಡರ್ ಪ್ರಕ್ರಿಯೆ ಪ್ರಗತಿಯಲ್ಲಿದೆ. |

**ವೈಎಸ್ ಡಿ-/ಇಬಿಬಿ/33/2020**

**(ಸಿ. ಟಿ. ರವಿ)**

ಪ್ರವಾಸೋದ್ಯಮ ಮತ್ತು ಕನ್ನಡ ಮತ್ತು ಸಂಸ್ಕೃತಿ

ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.